# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 841 (839)
2. ಮಾನ್ಯ ಸದಸ್ಯರ ಹೆಸರು — ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು)
3. ಉತ್ತರಿಸಬೇಕಾದ ದಿನಾಂಕ — 28/09/2020
4. ಉತ್ತರಿಸುವವರು — ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯು 18/01/2007 ರಂದೇ ಅಸ್ತಿತ್ವಕ್ಕೆ ಬಂದಿದ್ದರೂ ದಿನಾಂಕ 05/02/2018 ರಂದು ಆದಾಯ ತೆರಿಗೆ ಇಲಾಖೆಯಿಂದ 413.08 ಕೋಟಿ ತೆರಿಗೆ ಬಾಕಿ ಇದೆ ಎಂಬ ನೋಟಿಸ್ ಬಂದ 6 ತಂಗಳ ಬಳಿಕ ದಿನಾಂಕ :28/08/2018ರಂದು ಆದಾಯ ತೆರಿಗೆ ಕಾಯ್ದೆ ಕಲಂ 10(46) ಅಡಿಯಲ್ಲಿ ತೆರಿಗೆ ವಿನಾಯಿತಿ ಕೋರಿ ಮನವಿ ಸಲ್ಲಿಸಲು ಮಂಡಳಿಗೆ ಆದಾಯ ತೆರಿಗೆ ಕಲ್ಪನೆ ಇರಲಿಲ್ಲ ಎಂಬುದಾಗಿ ಅಸಂಬದ್ಧ ಲಿಖಿತ ಉತ್ತರವನ್ನು ನೀಡಿದ್ದು ಈ ರೀತಿಯ ಕರ್ತವ್ಯ ನಿರ್ಲಕ್ಷ ವಹಿಸಿದ ಅಧಿಕಾರಿಯ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ: | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ಸಂಗ್ರಹವಾಗಿರುವ ಸುಂಕ ನಿಧಿಯನ್ನು ವಾರ್ಷಿಕ ವರಮಾನ ಎಂದು ಆದಾಯ ತೆರಿಗೆ ಇಲಾಖೆಯು ರೂ. 413.08 ಕೋಟಿ ಮೊತ್ತವನ್ನು ಆದಾಯ ತೆರಿಗೆಯಾಗಿ ಕಟಾಯಿಸಿರುತ್ತದೆ. ಆದರೆ ದಿನಾಂಕ: 05-02-2018ರ ನಂತರದಲ್ಲಿಯೂ ಮಂಡಳಿಯು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br>• ಮಂಡಳಿಯು ದಿನಾಂಕ: 23-12-2017 ರಂದು ಸಲ್ಲಿಸಿದ್ದ ಫಾರ್ಮ್ 10ರ ವಿಚಾರಣೆಯನ್ನು ಆದಾಯ ತೆರಿಗೆ ಇಲಾಖೆಯವರು ದಿನಾಂಕ: 23-02-2018 ರಂದು ವಿಚಾರಣೆ ನಡೆಸಿ ತಿರಸ್ಕರಿಸಿರುತ್ತಾರೆ.<br>• ದಿನಾಂಕ: 28-02-2018 ರಂದು ಆದಾಯ ತೆರಿಗೆ ಇಲಾಖೆಗೆ ಮಂಡಳಿಯ ಕಾರ್ಯದರ್ಶಿಗಳು ಕೇಂದ್ರ ಸರ್ಕಾರದ ದಿನಾಂಕ: 31-07-2017ರ ಸುತ್ತೋಲೆಯನ್ವಯ ಡಿಮಾಂಡ್ ನೋಟಿಸ್‌ಗೆ ಮೇಲ್ಮನವಿ ಸಲ್ಲಿಸುವ ಪೂರ್ವದಲ್ಲಿ ಶೇ. 20 ರಷ್ಟು ಮೊತ್ತವನ್ನು ಪಾವತಿಸಲು ಸರ್ಕಾರದ ಅನುಮೋದನೆ ಕೋರಿದ್ದು, ಅನುಮೋದನೆ ಸಿಕ್ಕ ನಂತರ ಪಾವತಿಸಲಾಗುವುದು, ಇದಕ್ಕಾಗಿ 10 ದಿನಗಳ ಅವಕಾಶ ನೀಡುವಂತೆ ಪತ್ರದ ಮೂಲಕ ಕೋರಲಾಗಿರುತ್ತದೆ.<br>• ದಿನಾಂಕ:28-02-2018 ರಂದೇ ಆನ್‌ಲೈನ್‌ನಲ್ಲಿ ಚಾರ್ಟೆಡ್ ಅಕೌಂಟೆಂಟ್ ಶ್ರೀ ಪಾರ್ಥಸಾರಥಿಯವರ ಮುಖಾಂತರ CIT(A) ಗೆ ಮೇಲ್ಮನವಿ ಸಲ್ಲಿಸಲಾಗಿರುತ್ತದೆ. ಅದರನ್ವಯ ರೂ. 413.08 ಕೋಟಿ ಮತ್ತು ಶೇ. 6ರಷ್ಟು ಬಡ್ಡಿಯೊಂದಿಗೆ ಮರುಪಾವತಿಸಲು ಕೋರಲಾಗಿರುತ್ತದೆ.<br>• ಅದಾಗಿಯೂ, ಅದೇ ದಿನ ಅಂದರೆ ದಿನಾಂಕ: 28-02-2018 ರಂದು ತೆರಿಗೆ ತಗಾದೆ ಮೊತ್ತ ರೂ. 413.08 ವನ್ನು ಕೆನರಾ ಬ್ಯಾಂಕ್, ಹೊಂಗೇಗೌಡನಗರ ಶಾಖೆಯಿಂದ ಆದಾಯ ತೆರಿಗೆ ಇಲಾಖೆಗೆ ವರ್ಗಾಯಿಸಿಕೊಂಡಿರುತ್ತಾರೆ.<br>• ದಿನಾಂಕ:12-07-2018ರಿಂದ ಮಾನ್ಯ ಸರ್ಕಾರದ ಕಾರ್ಯದರ್ಶಿಗಳು ಕಾರ್ಮಿಕ ಇಲಾಖೆ ಇವರು ಕೇಂದ್ರ ಸರ್ಕಾರದ ಕಾರ್ಯದರ್ಶಿಗಳಿಗೆ ಪತ್ರ ಬರೆದು ಮಂಡಳಿಯ ಸುಂಕದ ಮೊತ್ತಕ್ಕೆ ಆದಾಯ ತೆರಿಗೆ ವಿನಾಯಿತಿಗೆ ಸಂಬಂಧಿಸಿದಂತೆ, ಸೂಕ್ತ ಆದೇಶ ನೀಡುವಂತೆ ಕೋರಿರುತ್ತಾರೆ.<br>• ದಿನಾಂಕ: 30-04-2018ರಂದು ಮಂಡಳಿಯ ಕಾರ್ಯದರ್ಶಿಗಳು ಸರ್ಕಾರದ ಕಾರ್ಯದರ್ಶಿಗಳ ಸೂಚನೆಯ ಮೇರೆಗೆ ರಾಷ್ಟ್ರದ ಎಲ್ಲಾ ರಾಜ್ಯಗಳ ಮಂಡಳಿಗಳಿಗೆ ಪತ್ರ ಬರೆದು ಆದಾಯ ತೆರಿಗೆ ಇಲಾಖೆಯಿಂದ ಸುಂಕದ ಮೊತ್ತಕ್ಕೆ ಆದಾಯ ತೆರಿಗೆ ಕಡಿತ ಮಾಡಲಾಗಿದ್ದರೆ ಆದಾಯ ತೆರಿಗೆಗೆ ವಿನಾಯಿತಿ ತೆಗೆದುಕೊಂಡಿರುವ ಕ್ರಮದ ಬಗ್ಗೆ ಮಾಹಿತಿ ನೀಡುವಂತೆ ಕೋರಿರುತ್ತಾರೆ. ಅದರಂತೆ, ಪಂಜಾಬ್ ರಾಜ್ಯದ ಮಂಡಳಿಯು ಈಗಾಗಲೇ |

| | | |
|---|---|---|
| | | ಆದಾಯ ತೆರಿಗೆ ಇಲಾಖೆಗೆ ಮೊತ್ತ ಪಾವತಿಸಿ ಮೇಲ್ಮನವಿಯನ್ನು ಸಲ್ಲಿಕೆ ಮಾಡಿ ಅದರ ವಿಚಾರಣೆ ಮುಕ್ತಾಯವಾದ ನಂತರ ಮೂಲ ಮೊ_ತ ಮತ್ತು ಬಡ್ಡಿಯೊಂದಿಗೆ ಆದಾಯ ತೆರಿಗೆ ಇಲಾಖೆಯು ವಾಪಸ್ಸು ಮಾಡಿರುವುದಾಗಿ ದಿನಾಂಕ:28-07-2018ರ ಪತ್ರದಲ್ಲಿ ತಿಳಿಸಿರುತ್ತಾರೆ. ಇದರ ಆಧಾರದ ಮೇಲೆ ಮಂಡಳಿಯ ಕಾರ್ಯದರ್ಶಿಗಳು ದಿನಾಂಕ:28-08-2018ರಲ್ಲಿ ಆದಾಯ ತೆರಿಗೆ ಇಲಾಖೆಗೆ ಪಂಜಾಬ್ ಮಾದರಿಯಂತೆ, ಮಂಡಳಿಗೂ ವಿನಾಯಿತಿ ನೀಡುವಂತೆ ಕೋರಿರುತ್ತಾರೆ.<br>ಸದರಿ ಸಾಲಿಗೆ ಅಂದರೆ AY 2015-16 ಕ್ಕೆ ಆದಾಯ ತೆರಿಗೆಯ ಬಗ್ಗೆ ಪರಿಣಿತಿ ಹೊಂದಿರುವ ವಕೀಲರ ಮೂಲಕ ಸೂಕ್ತ ದಾಖಲಾತಿಗಳೊಂದಿಗೆ ಸಿಐಟಿ (ಅಪೀಲ್ಸ್), ಬೆಂಗಳೂರು ಇವರಲ್ಲಿ ಮೇಲ್ಮನವಿಯನ್ನು ದಿನಾಂಕ 28-02-2018 ರಂದು ಸಲ್ಲಿಸಲಾಗಿದೆ. ತದನಂತರ ವಕೀಲರ ಅನಾರೋಗ್ಯದ ಕಾರಣ ಪ್ರಕರಣವನ್ನು ಹಿಂಪಡೆದು ಆದಾಯ ತೆರಿಗೆಯಲ್ಲಿ ನುರಿತ ಚಾರ್ಟ್‌ರ್ಡ್ ಅಕೌಂಟೆಂಟ್ ರವರ ಮೂಲಕ ಇನ್ನು ಹೆಚ್ಚಿನ ದಾಖಲಾತಿಗಳನ್ನು ಆದಾಯ ತೆರಿಗೆ ಇಲಾಖೆಗೆ ಒದಗಿಸಲಾಗಿದೆ. ಪ್ರಕರಣವು 02 ಬಾರಿ ವಿಚಾರಣೆಯಾಗಿದೆ. ಅಂತಿಮ ತೀರ್ಪು ಬರುವ ನಿರೀಕ್ಷಣೆಯಲ್ಲಿದೆ.<br>ಆದಾಯ ತೆರಿಗೆಯ ಬಗ್ಗೆ ಪರಿಣಿತಿ ಹೊಂದಿರುವ ವಕೀಲರ ಮೂಲಕ ಸೂಕ್ತ ದಾಖಲೆಗಳೊಂದಿಗೆ ಸಂಬಂಧಪಟ್ಟ ಪ್ರಾಧಿಕಾರ ಸಿ.ಬಿ.ಡಿ.ಟಿ ಗೆ ಮೇಲ್ಮನವಿ ಸಲ್ಲಿಸಿದ್ದು, ಸದರಿ ಮೊತ್ತವನ್ನು ವಾಪಸ್ಸು ಪಡೆಯಲು ಕ್ರಮ ಕೈಗೊಳ್ಳಲಾಗುತ್ತಿದೆ. ಪ್ರಕರಣವು ಪ್ರಗತಿಯಲ್ಲಿರುತ್ತದೆ. |
| ಆ) | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯು ಆದಾಯ ತೆರಿಗೆ ಕಾಯ್ದೆಯ ಕಲಂ 12ರ ಅನ್ವಯ ದತ್ತಿ ಸಂಸ್ಥೆ ಎಂದು ನೋಂದಣಿ ಮಾಡಿದ ಬಳಿಕ ದತ್ತಿ ಸಂಸ್ಥೆಯು ಆದಾಯ ತೆರಿಗೆ ವಿನಾಯಿತಿ ಕೋರಿ ಮನವಿ ಸಲ್ಲಿಸದಿದ್ದರೂ ವಿನಾಯಿತಿ ನೀಡಿದ ಉದಾಹರಣೆಗಳು ಇವೆಯೇ: | ಆದಾಯ ತೆರಿಗೆ ಕಾಯ್ದೆಯ ಕಲಂ 12ರ ಅನ್ವಯ ದತ್ತಿ ಸಂಸ್ಥೆ ಎಂದು ನೋಂದಣಿ ಪಡೆದ ಬಳಿಕ ದತ್ತಿ ಸಂಸ್ಥೆಯು ಆದಾಯ ತೆರಿಗೆ ವಿನಾಯಿತಿ ಕೋರಿ ಮನವಿ ಸಲ್ಲಿಸದಿದ್ದರೂ ವಿನಾಯಿತಿ ನೀಡಿದ ಮಾಹಿತಿಯು ಯಾವುದು ತಿಳಿದುಬಂದಿಲ್ಲ. |
| ಇ) | ಆದಾಯ ತೆರಿಗೆ ಕಾಯದೆಯನ್ವಯ 30 ದಿನಗಳ ಒಳಗಾಗಿ ಮೇಲ್ಮನವಿ ಸಲ್ಲಿಸಲು ವಿಫಲರಾದ ಅಧಿಕಾರಿಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ: ವಿಳಂಬ ಮಾಡಿದ ಅಧಿಕಾರಿಯನ್ನು ಅಮಾನತ್ತುಗೊಳಿಸದಿರಲು ಕಾರಣವೇನು: | ಮಂಡಳಿ ವತಿಯಿಂದ ಮೊತ್ತವನ್ನು ವಾಪಸ್ಸು ಪಡೆಯಲು ಮೇಲ್ಮನವಿ ಸಲ್ಲಿಸಿದ್ದು, ಪ್ರಕರಣವು ಪ್ರಗತಿಯಲ್ಲಿರುತ್ತದೆ. |
| ಈ) | ಪೂರ್ಣ ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳಲು ಕಾರಣರಾದ ಅಧಿಕಾರಿಗಳ ಮೇಲ ಯಾವ ಕ್ರಮ ಕೈಗೊಳ್ಳಲಾಗಿದೆ? | ಪ್ರಕರಣವು ಪ್ರಗತಿಯಲ್ಲಿರುವುದರಿಂದ ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. |

**ಕಾಇ 330 ಎಲ್‌ಇಟಿ 2020**

*(ಅರಬೈಲ್ ಶಿವರಾಂ ಹೆಬ್ಬಾರ್)*
ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು